# ಮಧುನಾಶಿನಿ

**ವೈಜ್ಞಾನಿಕ ಹೆಸರು** : ಜಿಮ್ನೆಮ ಸಿಲ್ವೆಸ್ಟ್ರೆ (*Gymnema sylvestre*)

**ಕುಟುಂಬ** : ಅಪೊಸೈನೇಸಿ (Apocynaceae)

**ಉಪಯೋಗಿಸುವ ಭಾಗ** : ಎಲೆ, ಬೇರು

**ವಾಣಿಜ್ಯ ಹೆಸರು** : ಮಧುನಾಶಿನಿ

## ಪರಿಚಯ:

ಮಧುನಾಶಿನಿಯು ತುಪ್ಪಳಗಳನ್ನು ಹೊಂದಿರುವ ದೊಡ್ಡ ಗಡುತರ ಬಳ್ಳಿಯಾಗಿದ್ದು, ಅಂಡಾಕಾರದ ಎಲೆಗಳನ್ನು ಹೊಂದಿರುತ್ತವೆ. ಹೂಗಳು ಹಳದಿ ಬಣ್ಣದಿಂದ ಕೂಡಿದ್ದು ಚಿಕ್ಕದಾಗಿರುತ್ತದೆ. ಹಸಿರುಬಣ್ಣದ ಎರಡೆರಡು ಶಂಕುವಿನಾಕಾರದ ಎರಡು ಅಂಗುಲ ಉದ್ದ ಕಾಯಿಗಳು ಒಟ್ಟಿಗೆ ಬೆಳೆಯುತ್ತವೆ. ಈ ಬಳ್ಳಿಯ ಎಲ್ಲಾ ಭಾಗಗಳು ಹಾಲಿನಂತಹ ದ್ರವವನ್ನು ಹೊಂದಿರುತ್ತವೆ.

## ಇತರೆ ಭಾಷೆಯ ಹೆಸರುಗಳು:

| | | |
|---|---|---|
| **ಸಂಸ್ಕೃತ** | : | ಮೇಶಶ್ರಿಂಗಿ |
| **ಹಿಂದಿ** | : | ಮೆರದಿಂಗಿ |
| **ತಮಿಳು** | : | ಪೊಡಪಾತ್ರ |
| **ತೆಲುಗು** | : | ಅದಿಗವ್ |
| **ಇಂಗ್ಲೀಷ್** | : | ಪೆರಿಫ್ಲೋಕ ಆಫ್ ವುಡ್ಸ್. |

## ಉಗಮ ಮತ್ತು ಹಂಚಿಕೆ:

ಸಾಮಾನ್ಯವಾಗಿ ಭಾರತದ ಉಷ್ಣಾಂಶವಿರುವ ಪ್ರದೇಶಗಳಲ್ಲಿ ಹಬ್ಬುವ ಬಳ್ಳಿಯಾಗಿದ್ದು, ಮಧ್ಯ ಮತ್ತು ದಕ್ಷಿಣ ಭಾರತ ಮತ್ತು ಪಶ್ಚಿಮಘಟ್ಟ ಹಾಗೂ ಗೋವಾ ಪ್ರದೇಶದಲ್ಲಿ ಸಾಮಾನ್ಯವಾಗಿ ಕಂಡು ಬರುತ್ತದೆ. ಕರ್ನಾಟಕದಲ್ಲಿ ಇದನ್ನು ಅಂತರ ಬೆಳೆಯಾಗಿ ತೆಂಗು, ಅಡಿಕೆ, ನುಗ್ಗೆ ಮುಂತಾದ ಪ್ಲಾಂಟೇಶನ್ ಬೆಳೆಗಳಲ್ಲಿ ಬಳ್ಳಿಯಾಗಿ ಹಬ್ಬಿಸಿ ಬೆಳೆಯಲಾಗುತ್ತಿದೆ. ಕರ್ನಾಟಕದಲ್ಲಿ ಹೆಚ್ಚಾಗಿ ಗದಗ, ಧಾರವಾಡ, ಬೆಳಗಾವಿ, ಹಾವೇರಿ, ಶಿರಸಿ ಜಿಲ್ಲೆಗಳಲ್ಲಿ ಹೆಚ್ಚಾಗಿ ಬೆಳೆಯಲಾಗುತ್ತಿದೆ.

## ಬೇಸಾಯ ಕ್ರಮಗಳು:

**ಮಣ್ಣು :** ಮಧುನಾಶಿನಿ ಬಳ್ಳಿಯನ್ನು ವಿಧವಿಧವಾದ ಮಣ್ಣುಗಳಲ್ಲಿ ಬೆಳೆಯಬಹುದು. ಆದಾಗ್ಯೂ ಚೆನ್ನಾಗಿ ನೀರು ಬಸಿದುಹೋಗುವ ಕೆಂಪು ಗೋಡುಮಣ್ಣು ಅಥವಾ ಕಪ್ಪು ಮಣ್ಣು ಸೂಕ್ತವಾಗಿದೆ. ಹೆಚ್ಚು ನೀರು ನಿಲ್ಲುವ ಪ್ರದೇಶ ಈ ಬೆಳೆಯ ಬೇಸಾಯಕ್ಕೆ ಸೂಕ್ತವಲ್ಲ.

## ಹವಾಗುಣ:

ತೇವಾಂಶ ವಿರುವ ಬೆಚ್ಚನೆಯ ಹವಾಮಾನ ಮತ್ತು ಸಮುದ್ರ ಮಟ್ಟದಿಂದ 100 ರಿಂದ 1000ಮೀ. ಎತ್ತರದ ಪ್ರದೇಶವು ಈ ಬೆಳೆಗೆ ಸೂಕ್ತ. ಈ ಬೆಳೆಯನ್ನು ಹೆಚ್ಚಿನ ತೇವಾಂಶವಿರುವ ಮತ್ತು ಜಾಸ್ತಿ ಮಳೆ ಬೀಳುವ ಪ್ರದೇಶಗಳಲ್ಲಿಯೂ ಸಹ ಬೆಳೆಯಬಹುದು. ಶೇ.20 ರಿಂದ 25 ರಷ್ಟು ನೆರಳು ಇರುವ (ಅಂದರೆ ತೆಂಗಿನ ಮತ್ತು ಅಡಿಕೆ ತೋಟದಲ್ಲಿ) ಪ್ರದೇಶದಲ್ಲಿ ಚೆನ್ನಾಗಿ ಬೆಳೆಯುತ್ತದೆ.

**ತಳಿಗಳು:** ಯಾವುದೇ ತಳಿಗಳಿಗಳನ್ನು ಅಭಿವೃದ್ಧಿಪಡಿಸಿರುವುದಿಲ್ಲ.

## ವಿಧಗಳು:

1. **ಸಣ್ಣ ಎಲೆಯುಳ್ಳ ವಿಧ :** ಎಲೆ ಅಂಡಾಕಾರವಿದ್ದು 1.50 ರಿಂದ 2.5 ಸೆಂ.ಮೀ ಅಗಲ ಮತ್ತು 2 ರಿಂದ 3.5 ಸೆಂ.ಮೀ ಉದ್ದದ ಎಲೆಗಳನ್ನು ಹೊಂದಿದ್ದು ತುಂಬಾ ಮೃದುವಾಗಿರುತ್ತದೆ. ಎಲೆಯ ಮೇಲ್ಭಾಗದಲ್ಲಿ ಮೃದುವಾದ ತುಪ್ಪಳವಿರುತ್ತದೆ. ಇದು ಹೆಚ್ಚಾಗಿ ಒಣ ಪ್ರದೇಶದಲ್ಲಿ ಕಂಡುಬರುತ್ತದೆ.

2. **ಅಗಲ ಎಲೆಯುಳ್ಳ ವಿಧ :** ಈ ಬಳ್ಳಿಯ ಎಲೆಗಳು ಅಂಡಾಕಾರವಿದ್ದು 3.50 ರಿಂದ 5.0 ಸೆಂ. ಮೀ ಅಗಲ ಮತ್ತು 3 ರಿಂದ 6 ಸೆಂ.ಮೀ ಉದ್ದ ಇದ್ದು ಬಿರುಸಾದ ಎಲೆಗಳು ಇರುತ್ತವೆ. ಇದರ ಎಲೆಗಳು ಮೇಲ್ಕಂಡ ಸಣ್ಣ ಎಲೆ ವಿಧಕ್ಕಿಂತ ಹೆಚ್ಚು ಹಸಿರಾಗಿರುತ್ತವೆ ಮತ್ತು ಎಲೆಗಳ ಮೇಲೆ ಮೃದುವಾದ ತುಪ್ಪಳವಿರುವುದಿಲ್ಲ.

## ಸಸ್ಯಾಭಿವೃದ್ಧಿ :

ಮಧುನಾಶಿನಿಯನ್ನು ಬೀಜ ಅಥವಾ ಕಾಂಡಗಳಿಂದ ಸಸ್ಯಾಭಿವೃದ್ಧಿ ಮಾಡಬಹುದಾಗಿದೆ. ಬಳ್ಳಿಯಲ್ಲಿ ನವೆಂಬರ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ಹಣ್ಣು ಬಿಡುತ್ತದೆ. ಹೊಸದಾಗಿ ಬಿಡಿಸಿದ ಹಣ್ಣಿನಿಂದ ಬೀಜಗಳನ್ನು ತೆಗೆದು ಒಂದು ರಾತ್ರಿ ನೀರಿನಲ್ಲಿ ನೆನೆಹಾಕಿ, ಮರುದಿನ ಮರಳು ಮಿಶ್ರಿತ ಮಣ್ಣಿನಲ್ಲಿ ಸಸಿಮಡಿ ಮಾಡಿ ಬಿತ್ತಬೇಕು. ನಂತರ ಪ್ರತಿ ದಿವಸ ನೀರು ಕೊಡುವುದು ಅಗತ್ಯ. ಬೀಜ 15 ದಿನಗಳಲ್ಲಿ ಮೊಳಕೆಯೊಡೆಯುತ್ತದೆ. ಇವುಗಳನ್ನು 40 ರಿಂದ 50 ದಿನಗಳ ನಂತರ ಮಣ್ಣು, ಕೊಟ್ಟಿಗೆ ಗೊಬ್ಬರ, ತೆಂಗಿನ ನಾರಿನ ಪುಡಿ ಮತ್ತು ಮರಳು ಮಿಶ್ರಣವನ್ನು ಪಾಲಿಥೀನ್ ಚೀಲದಲ್ಲಿ ತುಂಬಿ ಅವುಗಳಿಗೆ ಸಸಿಗಳನ್ನು ವರ್ಗಾಯಿಸುವುದು.

## ನಾಟಿ ಮಾಡುವುದು :

ಜೂನ್‌ನಿಂದ ಜುಲೈ ತಿಂಗಳು ನಾಟಿ ಮಾಡಲು ಸೂಕ್ತವಾದ ಕಾಲ. ಮಾರ್ಚ್ ತಿಂಗಳಲ್ಲಿ 2.5 X 1.8 ಮೀ. ಅಂತರದಲ್ಲಿ 0.5 ಘನ ಮೀಟರ್ ಅಳತೆಯ ಗುಂಡಿಗಳನ್ನು ತೆಗೆದು ಅದಕ್ಕೆ ಹಸಿರೆಲೆ ಗೊಬ್ಬರ, ಕೊಟ್ಟಿಗೆ ಗೊಬ್ಬರ ಹಾಗೂ ಮೇಲ್ಮಣ್ಣು ತುಂಬುವುದು. ಒಂದು ವಾರದ ನಂತರ ಬೇರು ಬೆಳವಣಿಗೆಯಾದ ಕಾಂಡದ ತುಂಡುಗಳನ್ನು ನಾಟಿ ಮಾಡಬೇಕು. ಒಂದು ಎಕರೆಗೆ 900 ಸಸಿಗಳು ಬೇಕಾಗುತ್ತವೆ.

## ಆಧಾರ/ಆಸರೆ ಕೊಡುವುದು:

ಮಧುನಾಶಿನಿಯು ಬಳ್ಳಿಯಾದ್ದರಿಂದ 'Y' ಆಕಾರದ ಎರಡು ಮೀಟರ್ ಎತ್ತರದ ಕಲ್ಲಿನ ಕಂಬಕ್ಕೆ ಒಂದು ಮೀಟರ್ ಉದ್ದದ ಎರಡು ಕಬ್ಬಿಣ ಸಲಾಕೆಗಳನ್ನು 60 ಡಿಗ್ರಿ ಕೋನದಲ್ಲಿ ಕಂಬಕ್ಕೆ ಅಳವಡಿಸಬೇಕು. ಇದಕ್ಕೆ ಮತ್ತೆ ಮೂರು ಪಕ್ಕ ತಂತಿಗಳನ್ನು ಕಟ್ಟಿ ಈ ತಂತಿಗಳ ಮೇಲೆ ಬಳ್ಳಿಗಳನ್ನು ಹಬ್ಬುವಂತೆ ಮಾಡಬೇಕು. ಈ ಬಳ್ಳಿ ಹಬ್ಬಿಸುವ ಅವಧಿಯಲ್ಲಿ ಕಾಂಡಗಳು ನೆಲದ ಮೇಲೆ ಹರಡದಂತೆ ನೋಡಿಕೊಳ್ಳಬೇಕು.

## ನೀರಾವರಿ :

ನಾಟಿ ಮಾಡಿದಾಗ ಮತ್ತು ಕಟಾವು ಮಾಡಿದಾಗ ಒಮ್ಮೆ ನೀರನ್ನು ಒದಗಿಸಿದ ನಂತರ ಪ್ರತಿ 5–6 ದಿನಗಳಿಗೊಮ್ಮೆ ನೀರು ಒದಗಿಸಬೇಕು. ಆದರೆ ಬೇಸಿಗೆಯಲ್ಲಿ ಹವಾಮಾನಕ್ಕನುಗುಣವಾಗಿ 4–5 ದಿನಗಳಿಗೊಮ್ಮೆ ನೀರು ಹಾಯಿಸಬೇಕು.

## ಕಳೆ ನಿರ್ವಹಣೆ :

ಮಧುನಾಶಿನಿ ಬಳ್ಳಿಯ ಬುಡದಲ್ಲಿ ಸುತ್ತಲಿನ ಒಂದು ಮೀಟರ್ ಸುತ್ತಳತೆಯ ಪ್ರದೇಶವನ್ನು ತಿಂಗಳಿಗೊಮ್ಮೆ ಕಳೆ ತೆಗೆದು ಸ್ವಚ್ಛವಾಗಿಡಬೇಕು.

## ಸಸ್ಯ ಸಂರಕ್ಷಣೆ:

**ಕೀಟಗಳು :** ಸಸಿ ಹೇನು, ನುಶಿ ಮತ್ತು ಹಸಿರು ದುಂಬಿ ಕೀಟಗಳು ಹೆಚ್ಚಾಗಿ ಕಂಡು ಬರುತ್ತದೆ. ನಿಯಂತ್ರಣಕ್ಕೆ 1 ಲೀಟರ್ ನೀರಿಗೆ 10 ಮಿ. ಲೀ. ಬೇವಿನ ಎಣ್ಣೆಯನ್ನು ಬೆರೆಸಿ 15 ದಿನಗಳಿಗೊಮ್ಮೆ ಸಿಂಪಡಿಸಬೇಕು.

**ರೋಗಗಳು :** ಬೂದಿ ರೋಗ ಮತ್ತು ಎಲೆಚುಕ್ಕೆ ರೋಗ ಹೆಚ್ಚಾಗಿ ಕಂಡುಬರುತ್ತದೆ. ಇದರ ನಿವಾರಣೆಗೆ 4–5 ಮಿ.ಲೀ. ಪಂಚಗವ್ಯವನ್ನು 1 ಲೀ. ನೀರಿನಲಲ್ಲಿ ಬೆರೆಸಿ 15 ದಿನಗಳಿಗೊಮ್ಮೆ ಸಿಂಪಡಿಸಬೇಕು.

## ಕೊಯ್ಲು ಮತ್ತು ಇಳುವರಿ :

ಎಲೆಗಳು ಔಷಧೀಯ ಭಾಗವಾಗಿರುವುದರಿಂದ ಮಧುನಾಶಿನಿ ಸಸ್ಯವು ಪೂರ್ತಿಯಾಗಿ ಕೊಯ್ಲಾಗುತ್ತದೆ. ನಾಟಿ ಮಾಡಿದ ಎರಡು ವರ್ಷಗಳ ನಂತರ ಈ ಬಳ್ಳಿಯು ಕೊಯ್ಲಿಗೆ ಬರುತ್ತದೆ.

ಹೂವು ಬಿಟ್ಟಾಗ ಅಂದರೆ ಜೂನ್ ಕೊನೆಯವಾರ ಅಥವಾ ಜುಲೈ ಮೊದಲ ವಾರದಲ್ಲಿ ಕಟಾವು ಮಾಡಲು ಸೂಕ್ತ ಸಮಯ. ಎಲೆಗಳನ್ನು ಹೂವು ಮೊಗ್ಗು ಸಮೇತ ಕಟಾವು ಮಾಡುವುದು. ನಂತರ ಕೊಯ್ಲು ಮಾಡಿದ ಎಲೆಗಳನ್ನು ನೆರಳಿನಲ್ಲಿ ಚೆನ್ನಾಗಿ ಗಾಳಿಯಾಡುವ ಹಾಗೂ ಸ್ವಚ್ಛವಾದ ಸ್ಥಳದಲ್ಲಿ 7 ರಿಂದ 8 ದಿನಗಳವರೆಗೆ ಒಣಗಿಸಬೇಕು. ಒಣಗಿದ ಎಲೆಗಳನ್ನು ಶೇಕಡಾ 10ಕ್ಕಿಂತ ಹೆಚ್ಚು ತೇವಾಂಶವಿಲ್ಲದಂತೆ ನೋಡಿಕೊಳ್ಳಬೇಕು. ಬಳ್ಳಿಯ ಬೆಳವಣಿಗೆಗೆ ಅನುಸಾರವಾಗಿ ಕಟಾವು ಮಾಡಬೇಕು. ಸಸಿ ನೆಟ್ಟ ಮೊದಲ ಎರಡು ವರ್ಷಗಳಲ್ಲಿ ವರ್ಷಕ್ಕೆ ಒಂದು ಕಟಾವು ಮಾಡಬೇಕು. ಆದರೆ ನಂತರದ ವರ್ಷಗಳಲ್ಲಿ ಎರಡು ಅಥವಾ ಮೂರು ಕಟಾವು ಮಾಡಿ ಎಲೆಗಳನ್ನು ಒಣಗಿಸಿ ಶೇಖರಿಸಬಹುದು.

ಪ್ರತಿ ಬಳ್ಳಿಗೆ ಸರಾಸರಿ 5 ರಿಂದ 6 ಕಿ.ಗ್ರಾಂ ಒಣಗಿದೆಲೆಗಳ ಇಳುವರಿ ದೊರೆಯುತ್ತದೆ. ಹೆಕ್ಟೇರಿಗೆ 10,000 – 15,000 ಕಿ. ಗ್ರಾಂ ಗಳಷ್ಟು ಒಣ ಎಲೆಯ ಇಳುವರಿ ಪಡೆಯಬಹುದಾಗಿದೆ.

## ಖರ್ಚು ಮತ್ತು ಆದಾಯ( ಒಂದು ಹೆಕ್ಟೇರಿಗೆ)

| ಬೆಳೆ | ದರ (ಕೆ.ಜಿ.ಗೆ) (ರೂ.) | ಖರ್ಚು (ರೂ.) | ನಿವ್ವಳ ಲಾಭ (ರೂ.) |
|---|---|---|---|
| ಮಧುನಾಶಿನಿ (ಒಣಗಿದ ಎಲೆ) | 15–20 | 25,000–30,000 | 2,70,000 |

## ಮಾರುಕಟ್ಟೆ :

1) ಆಯುಷ್ ಔಷಧಿ ತಯಾರಕರು 2) ರಫ್ತುದಾರರು

## ಔಷಧೀಯ ಉಪಯೋಗಗಳು:

ಈ ಬಳ್ಳಿಯು ಆಯುರ್ವೇದ ಮತ್ತು ಯುನಾನಿ ಪದ್ಧತಿಗಳ ಔಷಧಿ ತಯಾರಿಕೆಯಲ್ಲಿ ವಿವಿಧ ತರಹದ ರೋಗಗಳನ್ನು ನಿವಾರಿಸಲು ಬಳಕೆಯಲ್ಲಿದೆ. ಸಂದುನೋವು, ಭೇದಿ ತಡೆಗಟ್ಟಲು, ಶಕ್ತಿವರ್ಧಕ ಔಷಧಿ ತಯಾರಿಕೆಯಲ್ಲಿ, ತೊನ್ನು ನಿವಾರಿಸಲು ಹಾಗೂ ಎಲ್ಲಕ್ಕಿಂತ ಮಿಗಿಲಾಗಿ ರಕ್ತದಲ್ಲಿನ ಸಕ್ಕರೆ ಅಂಶವನ್ನು ಕಡಿಮೆ ಮಾಡಲು ಮತ್ತು ಯಕೃತ್ತಿನ ತೊಂದರೆಗಳಲ್ಲಿ ಬಳಸಲಾಗುತ್ತದೆ. ಸಕ್ಕರೆ ಖಾಯಿಲೆ ನಿವಾರಕ ಗುಣವುಳ್ಳ ಟ್ರೈಟರ್ಪಿನ್, ಸ್ಯಾಪೋನಿನ್ ಪದಾರ್ಥವನ್ನು ಎಲೆಗಳಿಂದ ಪಡೆಯಲಾಗುತ್ತದೆ. ಅಲ್ಲದೆ ಈ ಬಳ್ಳಿಯ ಎಲೆಗಳು ಜೆಮ್ನಿಮಿನ್, ಜೆಮ್ನಿಮಿನಿನ್ ಮತ್ತು ಜಿಮ್ನಿಮಿಕ್ ಆಮ್ಲಗಳ ಮೂಲವಾಗಿದೆ.  ಈ ಎಲ್ಲಾ ಉಪಯೋಗಗಳನ್ನು ಹೊಂದಿರುವ ಬೆಳೆಯನ್ನು ವಾಣಿಜ್ಯ ಬೆಳೆಯಾಗಿ ಬೆಳೆಯಬೇಕಾದ ಅಗತ್ಯವಿದೆ.







## ವಿಶೇಷ ಸೂಚನೆ :

ಈ ಕರಪತ್ರದಲ್ಲಿನ ಮಾಹಿತಿಯನ್ನು ಹಲವು ಪುಸ್ತಕಗಳಲ್ಲಿನ ಮಾಹಿತಿಯನ್ನು ಆಧರಿಸಿ ಕ್ರೋಡಿಕರಿಸಲಾಗಿದೆ. ಹೆಚ್ಚಿನ ಮಾಹಿತಿಗಾಗಿ ರೈತರು ತಜ್ಞರ ಸಲಹೆಯನ್ನು ಪಡೆಯುವಂತೆ ಕೋರಲಾಗಿದೆ. ಈ ಬೆಳೆಯನ್ನು ಮಿಶ್ರ / ಅಂತರ ಬೆಳೆಯಾಗಿ ಬೆಳೆಯುವಂತೆ ಶಿಫಾರಸು ಮಾಡಲಾಗಿದೆ.

**ಕರ್ನಾಟಕ ರಾಜ್ಯ ಔಷಧಿ ಗಿಡಮೂಲಿಕಾ ಪ್ರಾಧಿಕಾರ**




# ಮಧುನಾಶಿನಿ



**ಫೆಬ್ರವರಿ 2018**

ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯವರ ಕಛೇರಿ
4ನೇ ಮಹಡಿ, ವನವಿಕಾಸ, ಮಲ್ಲೇಶ್ವರಂ,
18ನೇ ಅಡ್ಡರಸ್ತೆ, ಬೆಂಗಳೂರು – 560003.
ದೂರವಾಣಿ ಸಂಖ್ಯೆ : 080–23464089/23466431
ಇ–ಮೇಲ್ : ceokampa@gmail.com